# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 19 (82)
2. ಸದಸ್ಯರ ಹೆಸರು : ಶ್ರೀ ಎಂ.ಎ.ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
3. ಉತ್ತರಿಸಬೇಕಾದ ದಿನಾಂಕ : 09.07.2018.
4. ಉತ್ತರಿಸುವ ಸಚಿವರು : ಜಲಸಂಪನ್ಮೂಲ ಸಚಿವರು

<table>
<tr><th>ಕ್ರ.ಸಂ.</th><th>ಪ್ರಶ್ನೆಗಳು</th><th>ಉತ್ತರಗಳು</th></tr>
<tr><td>ಅ)</td><td>ಎತ್ತಿನಹೊಳೆ ಯೋಜನೆಗಾಗಿ ಯಾವ ಯಾವ ಜಿಲ್ಲೆಗಳಲ್ಲಿ ಎಷ್ಟು ಎಕರೆ ಜಮೀನುಗಳನ್ನು ಸರ್ಕಾರವು ಸ್ವಾಧೀನಕ್ಕೆ ಪಡೆದಿದೆ; ಈ ಯೋಜನೆಗಾಗಿ ಜಮೀನು ಕಳೆದುಕೊಂಡವರಿಗೆ ಸರ್ಕಾರವು ನಿಗದಿಪಡಿಸಿರುವ ಪರಿಹಾರದ ಮೊತ್ತವೆಷ್ಟು; (ಸಂಪೂರ್ಣ ವಿವರ ನೀಡುವುದು)</td><td>ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ಮೊದಲನೆಯ ಹಂತದ ಏತ ಕಾಮಗಾರಿಗಳಿಗೆ (lift component) 181.63 ಹೆ. (448 ಎ 32.5 ಗು)ಖಾಸಗಿ ಜಮೀನು, 36.89 ಹೆ. (91 ಎ 03 ಗು) ಸರ್ಕಾರಿ ಜಮೀನು, 13.93 ಹೆ. (35 ಎ 02 ಗು) ಅರಣ್ಯ ಭೂಮಿ ಹೀಗೆ ಒಟ್ಟು – 232.45 ಹೆ. (574 ಎ 37.50 ಗು) ಜಮೀನು ಅಗತ್ಯವಿದ್ದು, ಈ ಪೈಕಿ ಇದುವರೆಗೂ ಖಾಸಗಿ ಜಮೀನಿನಲ್ಲಿ 41ಎ–09ಗುಂಟೆ ಜಮೀನನ್ನು ಸ್ವಾಧೀನ ಪಡಿಸಿಕೊಂಡಿದ್ದು, ಈವರೆಗೆ ನೀಡಲಾದ ಪರಿಹಾರದ ಮೊತ್ತವು ರೂ.17,45,61,735.20/– ಗಳಾಗಿರುತ್ತದೆ.<br><br>ಸದರಿ ಯೋಜನೆಯ ಮೊದಲನೇ ಹಂತದ ಏತ ಕಾಮಗಾರಿಗಳಿಗೆ ಅಗತ್ಯವಿರುವ ಖಾಸಗಿ ಜಮೀನನ್ನು ನೇರ ಖರೀದಿ ಮೂಲಕ ಪಡೆಯಲು ರಚಿಸಿದ ಹಾಸನ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯ ದರ ನಿರ್ಧರಣಾ ಸಲಹಾ ಸಮಿತಿಯು ದಿನಾಂಕ: 10.10.2017 ರಂದು ನಡೆದ ಸಭೆಯಲ್ಲಿ ಈ ಕೆಳಗಿನಂತೆ ಏಕರೂಪ ದರವನ್ನು ನಿಗಧಿ ಪಡಿಸಿ ಅನುಮೋದನೆ ನೀಡಿರುತ್ತದೆ.<br><br>ಜಿಲ್ಲೆ: ಹಾಸನ
<table>
<tr><th>ಕ್ರ ಸಂ</th><th>ಭೂಮಿಯ ತರಹೆ</th><th>ನಿಗದಿಯಾದ ದರ (ಎಕರೆಗೆ)</th><th>ಷರಾ</th></tr>
<tr><td>1</td><td>ಕಾಫೀ</td><td>38,46,576</td><td>ತೋಟಗಾರಿಕಾ ಬೆಳೆಗಳಿಗೆ ಪ್ರತ್ಯೇಕ ಮೌಲ್ಯಮಾಪನವನ್ನು ತೋಟಗಾರಿಕಾ ಇಲಾಖೆಯಿಂದ ಪಡೆದುಕೊಂಡು ಆ ಮೌಲ್ಯಕ್ಕೆ ಶೇ. 100% ಸೋಲೆಷಿಯಂ ಸೇರಿಸಿ ಬೆಳೆ ಪರಿಹಾರ ಪಾವತಿಸುವುದು.</td></tr>
<tr><td>2</td><td>ಖುಷ್ಕಿ</td><td>22,28,572</td><td>–</td></tr>
<tr><td>3</td><td>ತರಿ</td><td>24,39,024</td><td>–</td></tr>
<tr><td>4</td><td>ಬಾಗಾಯ್ತು</td><td>24,39,024</td><td>ತೋಟಗಾರಿಕಾ ಬೆಳೆಗಳಿಗೆ ಪ್ರತ್ಯೇಕ ಮೌಲ್ಯಮಾಪನವನ್ನು ತೋಟಗಾರಿಕಾ ಇಲಾಖೆಯಿಂದ ಪಡೆದುಕೊಂಡು ಆ ಮೌಲ್ಯಕ್ಕೆ ಶೇ. 100% ಸೋಲೆಷಿಯಂ ಸೇರಿಸಿ ಬೆಳೆ ಪರಿಹಾರ ಪಾವತಿಸುವುದು.</td></tr>
<tr><td>5</td><td>ಪರಿವರ್ತಿತ ಭೂಮಿ</td><td>2000 ಚ.ಮೀ</td><td>–</td></tr>
</table></td></tr>
<tr><td>ಆ)</td><td>ಎತ್ತಿನಹೊಳೆ ಯೋಜನೆಗಾಗಿ ಹೆಗ್ಗದ್ದೆ ಬಳಿಯ ಮಾರನಹಳ್ಳಿಯಲ್ಲಿ ಚೆಕ್‌ಡ್ಯಾಂ ನಿರ್ಮಾಣ ಮಾಡಲು ಡೈನಾಮೇಟ್ ಸಿಡಿಸಿದ ಪರಿಣಾಮ ಹಾನಿಗೊಳಗಾದ ಮನೆಗಳೆಷ್ಟು; ಹಾನಿಗೊಳಗಾದ ಮನೆಗಳ ಮಾಲೀಕರಿಗೆ ಪರಿಹಾರ</td><td>ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ಪ್ಯಾಕೇಜ್–4ರ ಕಾಮಗಾರಿಗಳು ಮಾರನಹಳ್ಳಿ ಗ್ರಾಮದಲ್ಲಿ ಬರುತ್ತಿದ್ದು, ಇದರಡಿಯಲ್ಲಿ ವಿಯರ್–2 ಮತ್ತು ಸುರಂಗ ಕೊರೆಯುವ ಕಾಮಗಾರಿಗಳನ್ನು ನಿರ್ವಹಿಸುತ್ತಿರುವ ಸಮಯದಲ್ಲಿ ಸ್ಫೋಟಕವನ್ನು ಬಳಸಲಾಗುತ್ತಿರುವುದರಿಂದ ಸದರಿ ಗ್ರಾಮದಲ್ಲಿ 19 ಮನೆಗಳಿಗೆ ತೊಂದರೆಯಾಗಿರುತ್ತದೆ ಎಂದು ತಿಳಿಸಿ ಗ್ರಾಮಸ್ಥರು ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ.<br><br>ಸದರಿ ಬ್ಲಾಸ್ಟಿಂಗ್‌ನಿಂದ ಕಂಪನ ಉಂಟಾಗಿದ್ದರ ಸಂಪೂರ್ಣ ಮಾಹಿತಿ ಹಾಗೂ ಮನೆಗಳು ಬಿರುಕು ಬಿಟ್ಟಿರುವ ಕುರಿತು ಪ್ರೊ. ವಿ.ಆರ್ ಶಾಸ್ತ್ರಿ, NITK,</td></tr>
</table>

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
| --- | --- | --- |
| | ನೀಡಲಾಗಿದೆಯೇ; ಪರಿಹಾರ ನೀಡಿದ್ದಲ್ಲಿ, ಅದರ ಸಂಪೂರ್ಣ ವಿವರ ನೀಡುವುದು; | Suratkal ಹಾಗೂ ಅವರ ಸಹೋದ್ಯೋಗಿಗಳು ಸ್ಥಳ ಪರಿವೀಕ್ಷಣೆ ನಡೆಸಿ ಕಂಪನದ ವಿಸ್ತೃತ ವರದಿ, ಬ್ಲಾಸ್ಟಿಂಗ್‌ನ ವಿಧಾನ, ಕಂಪನದ ಮಾಪಕವನ್ನು ಅಳತೆ ಮಾಡಿ ಸಂಪೂರ್ಣ ದತ್ತಾಂಶಗಳನ್ನು ಪರಿಶೀಲಿಸಿ ವಿಸ್ತೃತ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವರದಿಯ ಅನುಸಾರ ಕೇವಲ 4 ಮನೆಗಳಿಗೆ ಮಾತ್ರ ಕಂಪನ ತಗಲಿರುತ್ತದೆ ಎಂದು, ಆ 4 ಮನೆಗಳಿಗೆ ಪರಿಹಾರ ವಿತರಿಸಲು ಕೆಳಗಿನಂತೆ ಶಿಫಾರಸ್ಸು ಮಾಡಿರುತ್ತಾರೆ.<br>➢ ಶ್ರೀಮತಿ ಧರ್ಮಮ್ಮ ಗುರುವಪ್ಪ ಪೂಜಾರಿಯವರ ಮನೆಗೆ ಬಿರುಕು ಬಂದಿರುವುದು ಬ್ಲಾಸ್ಟಿಂಗ್‌ನ ಕಂಪನದಿಂದಲೇ ಎಂದು ದೃಢಪಡಿಸಿ ಈ ಮನೆಗೆ ಸೂಕ್ತ ಪರಿಹಾರ ನೀಡ ಬಹುದಾಗಿರುತ್ತದೆಂದು ತಿಳಿಸಿರುತ್ತಾರೆ.<br>➢ ಇದಲ್ಲದೇ ಶ್ರೀಮತಿ ಲಲಿತರಾಜು ಪೂಜಾರಿ ಹಾಗೂ ಶ್ರೀಮತಿ ಸರಸ್ವತಿ ರಾಘವ ಪೂಜಾರಿ ರವರ ಮನೆಯ ಸಣ್ಣ ಬಿರುಕುಗಳು ಸಹ ಕಂಪನದಿಂದಲೇ ಎಂದು ದೃಢಪಡಿಸಿ ಈ ಮನೆಗೆ ಸೂಕ್ತ ಪರಿಹಾರ ನೀಡ ಬಹುದಾಗಿರುತ್ತದೆಂದು ತಿಳಿಸಿರುತ್ತಾರೆ.<br>➢ ಅಲ್ಲದೇ ಶ್ರೀಮತಿ ಗಂಗಮ್ಮ ಕೋಂ ಶ್ರೀ ಪುಟ್ಟಸ್ವಾಮಿಗೌಡ ರವರ ಮನೆಯು ಕೇವಲ 60 ಮೀ. ದೂರದಲ್ಲಿದ್ದು, ಸದರಿ ಯವರು ಮನೆಯ ಸುರಂಗ ನಿರ್ಮಾಣದಿಂದ ಬಿರುಕುಗಳು ಬ್ಲಾಸ್ಟಿಂಗ್ ನಿಂದಲೇ ಎಂದು ಅಂದಾಜಿಸಲು ಕಷ್ಟಕರ ಎಂಬ ಮಾಹಿತಿಯೊಂದಿಗೆ ಇವರಿಗೂ ಸಹ ಮನೆಯ ಬಿರುಕುಗಳನ್ನು ಸರಿ ಪಡಿಸಲು ಸೂಕ್ತ ಪರಿಹಾರ ಪಡೆಯಲು ಅರ್ಹರು ಎಂದು ತಿಳಿಸಿರುತ್ತಾರೆ.<br>ಇನ್ನುಳಿದ 15 ಮನೆಗಳ ಮಾಲೀಕರು ಅವರ ಮನೆಗಳಲ್ಲಿಯೂ ಬಿರುಕು ಬಿಟ್ಟಿರುವುದರಿಂದ, ಅವರ ಮನೆಗಳನ್ನು ಕಟ್ಟಿಸಿಕೊಡುವಂತೆ ಒತ್ತಾಯಿಸಿ ಕಾಮಗಾರಿಯನ್ನು ಮುಂದುವರಿಸದಂತೆ ಅಡ್ಡಿಪಡಿಸಿ ಸ್ಥಗಿತಗೊಳಿಸಿರುತ್ತಾರೆ.<br>ಲೋಕೋಪಯೋಗಿ ಅಧಿಕಾರಿಗಳೊಂದಿಗೆ ಮನೆಗಳನ್ನು ಜಂಟಿ ಪರಿವೀಕ್ಷಣೆ ಮಾಡಲಾಗಿದ್ದು ಮನೆಗಳ ನಿರ್ಮಾಣ / ಪರಿಹಾರದ ಸಲುವಾಗಿ ತಗಲುವ ಅಂದಾಜುಗಳಿಗೆ ಲೋಕೋಪಯೋಗಿ ಇಲಾಖೆಯಿಂದ ದೃಢೀಕರಣ ಪಡೆದು, ಅನುಮೋದನೆ ಮಂಜೂರಾತಿಯಾದ ನಂತರ ಪರಿಹಾರ ನೀಡುವ ಸಂಬಂಧ ನಿಯಮಾನುಸಾರ ಮುಂದಿನ ಅಗತ್ಯ ಕ್ರಮ ವಹಿಸಲಾಗುವುದು. |
| ಇ) | ಈ ಯೋಜನೆಯಿಂದಾಗಿ ಸಕಲೇಷಪುರ ತಾಲ್ಲೂಕಿನಲ್ಲಿ ನಾಶವಾದ ಮರಗಳೆಷ್ಟು; ಅರಣ್ಯ ನಾಶದ ಬದಲಿಗೆ ಈ ಭಾಗದಲ್ಲಿ 2016-17 ಮತ್ತು 2017-18ನೇ ಸಾಲುಗಳಲ್ಲಿ ಎಷ್ಟು ಮರಗಳನ್ನು ನೆಡಲಾಗಿದೆ ಮತ್ತು ಎಲ್ಲೆಲ್ಲಿ ನೆಡಲಾಗಿದೆ? (ಸಂಪೂರ್ಣ ವಿವರ ನೀಡುವುದು) | ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ಮೊದಲನೆ ಹಂತದ ಕಾಮಗಾರಿಗೆ 13.93ಹೆ ಅರಣ್ಯ ಪ್ರದೇಶವು ಅವಶ್ಯವಿದ್ದು, ಒಟ್ಟು 4995 ಮರಗಳಲ್ಲಿ ಈವರೆಗೆ 3967 ಮರಗಳನ್ನು ಕಡಿಯಲಾಗಿದೆ. ಯೋಜನೆಗೆ ಅವಶ್ಯವಿರುವ 13.93ಹೆ ಅರಣ್ಯ ಭೂಮಿಗೆ ಬದಲಾಗಿ ಅರಸೀಕೆರೆ ತಾಲ್ಲೂಕು, ಗಂಡಸಿ ಹೋಬಳಿ, ಬಾಗೇಶಪುರ ಗ್ರಾಮದ ಸರ್ವೆ ನಂ.195 ರಲ್ಲಿ 351-21 ಎಕರೆ ಸರ್ಕಾರಿ ಗೋಮಾಳ ಪ್ರದೇಶದಲ್ಲಿ 61-31ಎಕರೆ / ಗುಂಟೆ ಭೂಮಿಯನ್ನು ಅರಣ್ಯ ಇಲಾಖೆಗೆ Compensatory afforestation ಸಲುವಾಗಿ ನೀಡಲಾಗಿದ್ದು, ದಿನಾಂಕ:22.5.2017 ರಂದು ಮ್ಯುಟೇಶನ್ ರಿಜಿಸ್ಟರ್ ಆಗಿರುತ್ತದೆ. ಕಡಿಯಲಾದ ಮರಗಳ ಬದಲಿಗೆ ಸಸಿ ನೆಟ್ಟು ಪೋಷಣೆ ಮಾಡಲು ಅರಣ್ಯ ಇಲಾಖೆಯವರು ಸೂಚಿಸಲಾದ ರೂ.35.52 ಲಕ್ಷ ಮೊತ್ತವನ್ನು ದಿನಾಂಕ: 30.03.2016 ರಂದು ಅರಣ್ಯ ಇಲಾಖೆಗೆ ಬಿಡುಗಡೆ ಮಾಡಲಾಗಿದೆ. |

**ಸಂಖ್ಯೆ: ಜಸಂಇ 31 ಡಬ್ಲ್ಯೂಎಲ್‌ಎ 2018**

**(ಡಿ.ಕೆ. ಶಿವಕುಮಾರ್)**
**ಜಲ ಸಂಪನ್ಮೂಲ ಸಚಿವರು**